ತತಶ್ಚೋಥುಮಕ್ಷಮುತ್ಪ್ರೇಕ್ಷಸ್ತಸ್ಮೈ ದತ್ವಾಕ್ಷಿಣೀ ಹರಃ ।
ವೀಕ್ಷ್ಯಾಶ್ಚರ್ಯಮಭೂದ್ವಿಸ್ಮಿತೋ ವಿಪ್ರಃ ಪುಷ್ಪಾಣಿ ವವೃಷುಃ ಸುರಾಃ ॥೭೨॥

ದೃಷ್ಟ್ವಾ ದೇವಂ ದೃಶಃ ಶರೇಣ ನಿಜಧೃಕ್ಪಾಟ್ಯೈಕಧೀರಂ ಕರಂ
ಸಂರುಧ್ಯಾತ್ಮಕರೇಣ ಕಿಂಕರವರಂ ತಂ ಶಂಕರಃ ಪ್ರಾಹ ಹಿ ।
ಕೈಲಾಸೇ ವಸವಾಸವಾದಿನಿಸುತೋ ಮಾತ್ರಾ ಚ ಪಿತ್ರಾ ಸ್ವಯಂ
ಮದ್ಭಕ್ತೈರ್ಗಣಪೈರ್ವಿಹೃತ್ಯ ಸುಚಿರಂ ಮತ್ಪ್ರೇಮಭಾಕ್ತ್ವಂ ಭವ ॥೭೩॥

ನೇತ್ರಾರ್ಪಕಸ್ಯೋದಾರಕೀರ್ತೇ
ಶ್ಚರಿತ್ರಮೇತಚ್ಚ ಪವಿತ್ರಮಿಷ್ಟಂ ।
ಪಠಂತಿ ಯೇ ಭಕ್ತಿಪರಾಯಣಾಸ್ತೇ
ಪ್ರಯಾಂತಿ ಸಾಮೀಪ್ಯಪದಂ ಹರಸ್ಯ ॥೭೪॥

ಪುನಃ ತನ್ನ ಇನ್ನೊಂದು ಕಣ್ಣನ್ನೂ ಕಿತ್ತು ತುಂಬಾ ಸಂತೋಷದಿಂದ ಆ ಎಡಗಣ್ಣಿದ್ದ ಜಾಗದಲ್ಲಿರಿಸಿದನು. ಕೂಡಲೇ ಭಕ್ತಿಪರವಶನಾದ ಆ ಮಹಾದೇವನು ಪಾರ್ವತಿಯೊಡನೆ ಅಲ್ಲಿ ಪ್ರತ್ಯಕ್ಷನಾದನು. ||೭೦-೭೧||

ಆ ಭಕ್ತನ ನಿಜವಾದ ಪ್ರೇಮವನ್ನು ನೋಡಿ ಸಂತುಷ್ಟನಾದ ಆ ಶಂಕರನು ಅವನಿಗೆ ಕಣ್ಣುಗಳನ್ನು ಪುನಃ ಕೊಟ್ಟುಬಿಟ್ಟನು. ಇದನ್ನು ನೋಡಿ ಆ ಬ್ರಾಹ್ಮಣನು ತುಂಬಾ ಆಶ್ಚರ್ಯಪಟ್ಟನು. ಇತ್ತ ದೇವತೆಗಳೂ ಸಂತೋಷದಿಂದ ಹೂಮಳೆಗರೆದರು. ||೭೨||

ಆಗ ನೀಲನು ತನ್ನ ದೃಷ್ಟಿಯೆಂಬ ಬಾಣದಿಂದ ಮಹಾದೇವನನ್ನು ನೋಡಿ ತನ್ನ ಕಣ್ಣುಗಳನ್ನು ಕೀಳಿಸುವುದರಲ್ಲಿ ಮುಂದುವರಿದು ಧೈರ್ಯವನ್ನು ಹೊಂದಿದ ತನ್ನ ಕೈಗಳನ್ನು ಜೋಡಿಸಿ ಶಿವನಿಗೆ ನಮಸ್ಕರಿಸಲು, ಆಗ ಆ ಶಂಕರನು ತನ್ನ ಭಕ್ತವರ್ಯನಾದ ನೀಲನಿಗೆ, ಅಯ್ಯಾ ಭಕ್ತನೇ, ನೀನು ನಿನ್ನ ತಂದೆತಾಯಿಗಳೊಡನೆ ಬಹಳಕಾಲ ನನ್ನ ಕೈಲಾಸದಲ್ಲಿ ವಾಸಮಾಡುತ್ತಾ, ನನ್ನ ಗಣನಾಯಕರೊಡನೆ ಸಂತೋಷದಿಂದ ವಿಹರಿಸುವನಾಗಿ ತನ್ನ ಪ್ರೀತಿಗೆ ಪಾತ್ರನಾಗು ಎಂದು ಮಹೇಶ್ವರನು ನೀಲನಿಗೆ ಅನುಗ್ರಹಮಾಡಿದನು. ||೭೩||

ಪರಶಿವನಿಗೆ ಭಕ್ತಿಯಿಂದ ತನ್ನ ಕಣ್ಣುಗಳನ್ನೇ ಸಮರ್ಪಿಸಿ ಉದಾರವಾದ ಕೀರ್ತಿಯನ್ನು ಸಂಪಾದಿಸಿದ ಈ ನೀಲನೆಂಬ ವ್ಯಾಧನ ಪವಿತ್ರವೂ ಇಷ್ಟವೂ ಆದ

**ಇತಿ ಶ್ರೀ ಶಿವರಹಸ್ಯೇ ಸದಾಶಿವಾಖ್ಯೇ ನವಮಾಂಶೇ ಭಿಲ್ಲಚರಿತ್ರೇ ಶಿವಪ್ರಸಾದೋ ನಾಮ ಪಂಚತ್ರಿಂಶೋಽಧ್ಯಾಯಃ**

---

ಕಥೆಯನ್ನು ಓದುವ ಭಕ್ತವರ್ಯರು ಪರಮೇಶ್ವರನ ಸಾಮೀಪ್ಯಸ್ಥಾನವನ್ನು ಹೊಂದು ವರೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ||೭೪||

ಇಲ್ಲಿಗೆ ಶ್ರೀಶಿವರಹಸ್ಯದ ಸದಾಶಿವಸಂಜ್ಞಕವಾದ ಒಂಬತ್ತನೆಯ ಅಂಶದಲ್ಲಿ ಭಿಲ್ಲಚರಿತ್ರೆಯ ವರ್ಣನೆಯಲ್ಲಿ ಶಿವನು ಬೇಡನಾದ ನೀಲನಿಗೆ ಮಾಡಿದ ಅನುಗ್ರಹವರ್ಣನೆಯೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶಿವಂಭೂಯಾತ್ ॥

